## ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1867 |
| ವಿಧಾನ ಪರಿಷತ್ ಸದಸ್ಯರ ಹೆಸರು | : | ಡಾ: ಕೆ. ಗೋವಿಂದರಾಜ್ (ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸುವವರು | : | ಮಾನ್ಯ ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ ಸಾರ್ವಜನಿಕ ವಲಯ ಉದ್ಯಮಗಳ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 15.03.2022 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಕಳೆದ 3 ವರ್ಷಗಳ ಅವಧಿಯಲ್ಲಿ ವಿವಿಧ ಕಾರಣಗಳಿಗಾಗಿ ಮುಚ್ಚಲ್ಪಟ್ಟ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಎಷ್ಟು; (ಕಾರಣಗಳ ಸಹಿತ ಸಂಪೂರ್ಣ ಮಾಹಿತಿಯನ್ನು ಪ್ರತ್ಯೇಕವಾಗಿ ಒದಗಿಸುವುದು) | ಕಾರ್ಖಾನೆಗಳು, ಬಾಯ್ಲರುಗಳು, ಕೈಗಾರಿಕಾ ಸುರಕ್ಷತೆ ಮತ್ತು ಸ್ವಾಸ್ಥ್ಯ ಇಲಾಖೆಯ ಕಾರ್ಯವ್ಯಾಪ್ತಿಯಲ್ಲಿ ಕೈಗಾರಿಕೆಗಳನ್ನು ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಕೈಗಾರಿಕೆಗಳೆಂದು ವಿಂಗಡಿಸಲಾಗಿರುವುದಿಲ್ಲ.<br>ರಾಜ್ಯದಲ್ಲಿ ಕಾರ್ಖಾನೆಗಳ ಕಾಯ್ದೆ 1948 ರಡಿಯಲ್ಲಿ ನೋಂದಾವಣೆಯಾದ ಕಾರ್ಖಾನೆಗಳ ಪೈಕಿ ಕಳೆದ ಮೂರು ವರ್ಷಗಳ ಅವಧಿಯಲ್ಲಿ ಮುಚ್ಚಲ್ಪಟ್ಟಿರುವ ಕಾರ್ಖಾನೆಗಳ ಸಂಖ್ಯೆಯನ್ನು ಈ ಮುಂದಿನಂತೆ ಒದಗಿಸಲಾಗಿದೆ.<br><br>ವರ್ಷ / ಮುಚ್ಚಲ್ಪಟ್ಟಿರುವ ಕಾರ್ಖಾನೆಗಳ ಸಂಖ್ಯೆ<br>2019 / 504<br>2020 / 562<br>2021 / 192<br>ಒಟ್ಟು / **1258**<br><br>ಸದರಿ ಕಾರ್ಖಾನೆಗಳು ಹಲವಾರು ಕಾರಣಗಳಿಂದ ಮುಚ್ಚಲಾಗಿರುತ್ತದೆ. ಇವುಗಳಲ್ಲಿ ಪ್ರಮುಖವಾಗಿ ಆರ್ಥಿಕ ಪರಿಸ್ಥಿತಿಗಳು, ಕೋವಿಡ್-19ರ ಸಂಕಷ್ಟ, ಕಾರ್ಮಿಕರ ವಲಸೆ, ಕಾರ್ಮಿಕರ ಸಮಸ್ಯೆಗಳು, ಕಚ್ಚಾ ವಸ್ತುಗಳ ಬೆಲೆ ಏರಿಕೆ, ಕಡಿಮೆ ಲಾಭ, ಲಭ್ಯವಿಲ್ಲದ ಸಂಪನ್ಮೂಲಗಳು, ಕಠಿಣ ಸ್ಪರ್ಧೆ ಇತ್ಯಾದಿ ಅಂಶಗಳು. |
| ಆ) | ಮುಚ್ಚಲ್ಪಟ್ಟ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳನ್ನು ಪುನರಾರಂಭಿಸಲು ಮತ್ತು ಪುನಶ್ಚೇತನಗೊಳಿಸುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡಿರುವ ಕ್ರಮಗಳೇನು; | ಸಾಲ ಪಡೆದು ಒತ್ತಡದಲ್ಲಿರುವ ರೋಗಗ್ರಸ್ಥ ಸಣ್ಣ ಕೈಗಾರಿಕೆಗಳ ಪುನ:ಶ್ಚೇತನಕ್ಕಾಗಿ ಆರ್‌ಬಿಐ ರವರು ಸಂಖ್ಯೆ: ಆರ್‌ಬಿಐ/2018-19/203 ದಿನಾಂಕ 07/06/2019 ರಂದು ಬ್ಯಾಂಕುಗಳಿಗೆ ಸುತ್ತೋಲೆ ನೀಡಿದ್ದು ಅದರಂತೆ ಬ್ಯಾಂಕುಗಳು |

| | | |
|---|---|---|
| | | ಕಾರ್ಯ ನಿರ್ವಹಿಸುತ್ತಿವೆ.<br>ರೋಗಗ್ರಸ್ಥ ಘಟಕಗಳ ಪುನಃಶ್ಚೇತನಕ್ಕಾಗಿ ಬ್ಯಾಂಕುಗಳು ಕೆಳಕಂಡ ಸವಲತ್ತುಗಳನ್ನು ನೀಡುತ್ತಿವೆ.<br>1) ಪಡೆದ ಸಾಲದ ಕಂತುಗಳನ್ನು ರೀ ಷೆಡ್ಯೂಲ್ ಮಾಡುವುದು.<br>2) ಅಗತ್ಯಕ್ಕೆ ಬೇಕಾಗಿರುವ ಹೆಚ್ಚುವರಿ ದುಡಿಮೆ ಬಂಡವಾಳ / ಅವಧಿ ಸಾಲ ನೀಡುವುದು<br>ರೋಗಗ್ರಸ್ತ ಕಾರ್ಖಾನೆಗಳನ್ನು ಪುನಃಶ್ಚೇತನಗೊಳಿಸಲು ಸರ್ಕಾರವು ಸರ್ಕಾರಿ ಆದೇಶ ಸಂಖ್ಯೆಸಿಐ 167 ಎಸ್‌ಪಿಐ 2001 ಬೆಂಗಳೂರು ದಿನಾಂಕ 25.09.2002ಮತ್ತು ಸಿಐ 406ಎಎಸ್‌ಪಿಐ 206 (ಪಿ1) ಬೆಂಗಳೂರು ದಿನಾಂಕ 22/1/2007 ರನ್ವಯ ಕೆಳಗಿನ ರಿಯಾಯಿತಿ ಮತ್ತು ಸವಲತ್ತುಗಳನ್ನು ಕಲ್ಪಿಸಲು ಆದೇಶ ಹೊರಡಿಸಿರುತ್ತದೆ. |
| | | 1. ಬೀಜ ಧನ ಸಾಲ<br>ಘಟಕದ ಪುನಃಶ್ಚೇತನ ಯೋಜನಾ ವೆಚ್ಚದ ಶೇ.25 ರಷ್ಟು ಹಣವನ್ನು ಗರಿಷ್ಠ ರೂ.2.50 ಲಕ್ಷಗಳ ಮಿತಿಗೊಳಪಟ್ಟು ಬಡ್ಡಿರಹಿತ ಬೀಜಧನವನ್ನು ಸಾಲದ ರೂಪದಲ್ಲಿ ಒದಗಿಸುವುದು.<br>2. ಕೆ.ಪಿ.ಟಿ.ಸಿ.ಎಲ್ / ವಿದ್ಯುತ್ ಸರಬರಾಜು ಕಂಪನಿಗಳಿಂದ ಪರಿಹಾರ: |
| | | • ಮುಚ್ಚುವ ಅವಧಿಯಲ್ಲಿ ಸ್ಥಿರ ಶುಲ್ಕಗಳು/ ಬೇಡಿಕೆ ಶುಲ್ಕಗಳನ್ನು ವಿಧಿಸದಂತೆ ಕೆ.ಪಿ.ಟಿ.ಸಿ.ಎಲ್ / ವಿದ್ಯುತ್ ಸರಬರಾಜು ಕಂಪನಿಗಳಿಗೆ ಸೂಚಿಸಬಹುದು.<br>• ಕೆ.ಪಿ.ಟಿ.ಸಿ.ಎಲ್ / ವಿದ್ಯುತ್ ಸರಬರಾಜು ಕಂಪನಿಗಳಿಗೆ ಬಾಕಿ ಇರುವ ವಿದ್ಯುತ್ ಬಿಲ್‌ನ್ನು 6 ಅರ್ಧವಾರ್ಷಿಕ ಕಂತುಗಳಲ್ಲಿ ಶೇ 6% ಬಡ್ಡಿದರದಲ್ಲಿ ಪಾವತಿಸಲು ಅವಕಾಶ<br>• ಕೆ.ಪಿ.ಟಿ.ಸಿ.ಎಲ್ / ವಿದ್ಯುತ್ ಸರಬರಾಜು ಕಂಪನಿಗಳು ರೋಗಗ್ರಸ್ಥ ಕೈಗಾರಿಕೆ ಮುಚ್ಚುವ ಅವಧಿಗೆ ಬಡ್ಡಿ ವಿಧಿಸುವುದಿಲ್ಲ. |

**3. ಕೆಐಎಡಿಬಿ/ ಕೆಎಸ್ಎಸ್ಐಡಿಸಿ ಮತ್ತು ಕಿಯೊನಿಕ್ಸ್‌ಗಳ ಬಾಕಿ ಸಾಲದ ಮರುಹಂಚಿಕೆ:**

ಕೆಐಎಡಿಬಿ/ಕೆಎಸ್ಎಸ್ಐಡಿಸಿ ಮತ್ತು ಕಿಯೊನಿಕ್ಸಗಳ ಬಾಕಿ ಸಾಲ ಪಾವತಿಯನ್ನು ಒಂದು ವರ್ಷ ಋಣಸ್ಥಗಿತದೊಂದಿಗೆ (moratorium) ಮುಂದೂಡಿ ಅದನ್ನು ನಾಲ್ಕು ವಾರ್ಷಿಕ ಕಂತುಗಳಲ್ಲಿ ಬಡ್ಡಿರಹಿತವಾಗಿ ಪಾವತಿಸಲು ಅವಕಾಶ.

**4. ಅಭಿವೃದ್ಧಿ ಸಾಲದ ಮರು ಹಂಚಿಕೆ**

ಅಭಿವೃದ್ಧಿ ಸಾಲ ಮರುಪಾವತಿಯನ್ನು ಕೈಗಾರಿಕೆಯು ಪುನಃಶ್ಚೇತನಗೊಳಿಸಿದ ನಂತರ ಮೂರು ವರ್ಷದ ಅವಧಿಯಲ್ಲಿ ಬಡ್ಡಿ ಇಲ್ಲದೇ ಪಾವತಿಸಲು ಅವಕಾಶ.

**5. ತೆರಿಗೆ ಸಂಬಂಧಿತ ಸೌಲಭ್ಯಗಳು:**

ತೆರಿಗೆ ಬಾಕಿಯನ್ನು 6 ಅರ್ಧ ವಾರ್ಷಿಕ ಕಂತುಗಳಲ್ಲಿ ಪ್ರತಿ ತಿಂಗಳಿಗೆ ಶೇ. 1/2 ರಂತೆ ಬಡ್ಡಿಸಹಿತ ಮರುಪಾವತಿ ಹಾಗೂ ಮುಂದಿನ ಮೂರು ವರ್ಷಗಳಲ್ಲಿ ಪಾವತಿಸುವ ಮಾಹೆಯ ತೆರಿಗೆಯಲ್ಲಿ ಶೇ.50 ರಷ್ಟು ಬಡ್ಡಿರಹಿತವಾಗಿ ಮುಂದೂಡಿ ನಂತರ 3 ವಾರ್ಷಿಕ ಕಂತುಗಳಲ್ಲಿ ಆಯಾ ಸಾಲಿನ ತೆರಿಗೆ ಜೊತೆಯಲ್ಲಿ ಮರುಪಾವತಿ ಮಾಡಲು ಅವಕಾಶ ನೀಡಲಾಗಿದೆ ಮತ್ತು ಘಟಕವು ಮುಚ್ಚಿರುವ ಅವಧಿಗೆ ಬಡ್ಡಿಯನ್ನು ವಿಧಿಸುವಂತಿಲ್ಲ.

ಇ) ಮುಚ್ಚಲ್ಪಟ್ಟ ಕೈಗಾರಿಕೆಗಳಿಂದ ಉದ್ಯೋಗ ಕಳೆದುಕೊಂಡ ಕಾರ್ಮಿಕರು ಮತ್ತು ಸಿಬ್ಬಂದಿಗಳು ಎಷ್ಟು; ಇವರನ್ನು ಮತ್ತೆ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುವ ನಿಟ್ಟಿನಲ್ಲಿ ಸರ್ಕಾರ ಕೈಗೊಂಡ ಕ್ರಮಗಳೇನು;

ಸದರಿ ಕಾರ್ಖಾನೆಗಳು ಮುಚ್ಚಲ್ಪಟ್ಟಿರುವುದರಿಂದ ಉದ್ಯೋಗ ಕಳೆದುಕೊಂಡ ಕಾರ್ಮಿಕರ ಅಂಕಿ ಅಂಶಗಳು ಈ ಮುಂದಿನಂತಿದೆ.

| ವರ್ಷ | ಮುಚ್ಚಲ್ಪಟ್ಟಿರುವ ಕಾರ್ಖಾನೆಗಳ ಸಂಖ್ಯೆ | ಸದರಿ ಕಾರ್ಖಾನೆಗಳಲ್ಲಿ ಕಾರ್ಯನಿರ್ವಹಿಸುತ್ತಿದ್ದ ಕಾರ್ಮಿಕರ ಸಂಖ್ಯೆ | |
|---|---|---|---|
| | | ಪುರುಷರು | ಮಹಿಳೆಯರು |
| 2019 | 504 | 20,665 | 15,940 |
| 2020 | 562 | 19,896 | 11,826 |
| 2021 | 192 | 9,385 | 5,478 |
| **ಒಟ್ಟು** | **1258** | **49,946** | **33,244** |
| | | ಒಟ್ಟು | **83,190** |

ಉದ್ಯೋಗ ಕಳೆದುಕೊಂಡ ಕಾರ್ಮಿಕರನ್ನು ಮತ್ತೆ ಉದ್ಯೋಗಗಳಲ್ಲಿ ತೊಡಗಿಸಿಕೊಳ್ಳುವ ಕ್ರಮ ಈ ಇಲಾಖೆಯ

| | | |
|---|---|---|
| | | ವ್ಯಾಪ್ತಿಗೆ ಬರುವುದಿಲ್ಲ. |
| ಈ) | ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಇಲಾಖೆ/ಸಚಿವಾಲಯ ಸಿಬ್ಬಂದಿಗಳ ಸಂಖ್ಯೆಯನ್ನು ಹೆಚ್ಚಿಸುವುದೂ ಸೇರಿದಂತೆ ಯಾವ ವಿವಿಧ ಯೋಜನೆಗಳನ್ನು ಸರ್ಕಾರ ರೂಪಿಸುತ್ತಿದೆ? (ಮಾಹಿತಿ ಒದಗಿಸುವುದು) | ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆಯಲ್ಲಿ ಶೇ 62% ರಷ್ಟು ಹುದ್ದೆಗಳು ಖಾಲಿ ಇದ್ದು ಅವುಗಳನ್ನು ಭರ್ತಿ ಮಾಡಲು ಪ್ರಸ್ತಾವನೆಯನ್ನು ಆರ್ಥಿಕ ಇಲಾಖೆಗೆ ಸಲ್ಲಿಸಲಾಗಿದೆ.<br><br>ಮುಂದುವರೆದು, ರಾಜ್ಯದಲ್ಲಿ ಸಣ್ಣ ಕೈಗಾರಿಕೆಗಳ ಅಭಿವೃದ್ಧಿಗೆ ಇರುವ ಯೋಜನೆಗಳ ವಿವರಗಳನ್ನು ಈ ಕೆಳಗೆ ನೀಡಲಾಗಿದೆ.<br><br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 6 ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br><br>3. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 75 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ. 60 ರಷ್ಟು ಗರಿಷ್ಠ ರೂ.5.00 ಲಕ್ಷ |

| | | |
|---|---|---|
| | | ಸಹಾಯಧನ ನೀಡಲಾಗುತ್ತಿದೆ.<br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ವರ್ಗದ ಮೊದಲ ಪೀಳಿಗೆಯ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಸ್ಥಾಪಿಸುವ ಹೊಸ ಘಟಕಗಳಿಗೆ ಗರಿಷ್ಠ ರೂ.5.00 ಕೋಟಿ ಯೋಜನಾ ವೆಚ್ಚದಲ್ಲಿ The Debit Equity 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ)ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿ ರಹಿತ ಗರಿಷ್ಟ ರೂ.75 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.<br>6. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2020-25 ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ. |
| | | 1. ಮುದ್ರಾಂಕ ಶುಲ್ಕ ವಿನಾಯಿತಿ<br>2. ನೋಂದಣಿ ಶುಲ್ಕ ರಿಯಾಯಿತಿ.<br>3. ಬಂಡವಾಳ ಹೂಡಿಕೆ ಸಹಾಯಧನ<br>4.ಕಿರು ಮತ್ತು ಸಣ್ಣ ಕೈಗಾರಿಕೆಗಳಿಗೆ ವಿದ್ಯುತ್ ಸಹಾಯಧನ<br>5. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>6. ರಫ್ತು ಆಧಾರಿತ ಘಟಕಗಳಿಗೆ ರಿಯಾಯಿತಿ.<br>7. ತ್ಯಾಜ್ಯ ಸಂಸ್ಕರಣಾ ಘಟಕಗಳ ಸ್ಥಾಪನೆಗೆ ಸಹಾಯಧನ.<br>8. ವಿದ್ಯುತ್ ತೆರಿಗೆ ವಿನಾಯಿತಿ<br>9. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಸಹಾಯಧನ<br>10. ಮಳೆ ನೀರುಕೊಯ್ಲು / ಸಂರಕ್ಷಣೆ ಸಹಾಯಧನ<br>11. ತಂತ್ರಜ್ಞಾನ ಉನ್ನತೀಕರಣಕ್ಕೆ ಬಡ್ಡಿ ಸಹಾಯಧನ |

ಸಿಐ 52 ಎಸ್‌ಎಸ್‌ಐ 2022

(ಎನ್.ನಾಗರಾಜು (ಎಂ.ಟಿ.ಬಿ))
ಪೌರಾಡಳಿತ, ಸಣ್ಣ ಕೈಗಾರಿಕೆಗಳು ಹಾಗೂ
ಸಾರ್ವಜನಿಕ ವಲಯ ಉದ್ಯಮಗಳ ಸಚಿವರು